# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 682
2) ಸದಸ್ಯರ ಹೆಸರು : ಶ್ರೀ. ಎಸ್.ನಾಗರಾಜ್ (ಸಂದೇಶ್ ನಾಗರಾಜ್)
3) ಉತ್ತರಿಸಬೇಕಾದ ದಿನಾಂಕ : 12.03.2020
4) ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ನಗರದ ಕ್ರಾಫರ್ಡ್ ಹಾಲ್ ಹಿಂಭಾಗದಲ್ಲಿ ಕುಕ್ಕರಹಳ್ಳಿ ಕೆರೆಗೆ ಸೇರುವ ರಸ್ತೆಯಲ್ಲಿರುವ (ಸರ್.ಎಸ್.ರಾಧಾಕೃಷ್ಣನ್ ಮಾರ್ಗ) ರೈಲ್ವೆ ಲೆವೆಲ್ ಕ್ರಾಸಿಂಗ್‌ನಲ್ಲಿ, ರೈಲ್ವೆ ಮೇಲು ಸೇತುವೆ ನಿರ್ಮಾಣ ಕಾಮಗಾರಿ ವಿಳಂಬವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದಕ್ಕೆ ಕಾರಣಗಳೇನು: | ಬಂದಿದೆ.<br>ಈ ಯೋಜನೆಗೆ ರೈಲ್ವೆ ಇಲಾಖೆಯಿಂದ ರೂ.3467.00ಲಕ್ಷಗಳಿಗೆ ಅಂದಾಜು ಪಟ್ಟಿಯನ್ನು ಸಿದ್ಧಪಡಿಸಿದ್ದು ಇದರಲ್ಲಿ ರೈಲ್ವೆ ಇಲಾಖೆಯ ಷೇರು ರೂ.792.22 ಲಕ್ಷಗಳು ಮತ್ತು ರಾಜ್ಯದ ಷೇರು ರೂ, 2675.31 ಲಕ್ಷಗಳೆಂದು ತಿಳಿಸಿ ಬ್ರಿಡ್ಜ್ ಪ್ರಾಪರ್ ಅನ್ನು ರೈಲ್ವೆ ಇಲಾಖೆಯಿಂದ ನಿರ್ಮಿಸುವುದಾಗಿ ಹಾಗೂ ಅಪ್ರೋಚ್ ರಸ್ತೆಗಳನ್ನು ಮೈಸೂರು ಮಹಾನಗರ ಪಾಲಿಕೆ ವತಿಯಿಂದ ಬ್ರಿಡ್ಜ್ ನಿರ್ಮಾಣದ ಜೊತೆಯಲ್ಲೇ ಪ್ರಾರಂಬಿಸಬೇಕೆಂದು ರೈಲ್ವೆ ಇಲಾಖೆಯಿಂದ ತಿಳಿಸಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ರಾಜ್ಯದ ಷೇರು ರೂ.2675.31 ಲಕ್ಷಗಳ ವಿಶೇಷ ಅನುದಾನವನ್ನು ನಗರಾಭಿವೃದ್ಧಿ ಇಲಾಖೆಯಿಂದ ಮೈಸೂರು ಮಹಾನಗರ ಪಾಲಿಕೆಗೆ ಬಿಡುಗಡೆ ಮಾಡಬೇಕಾಗಿರುತ್ತದೆ. ಅನುದಾನ ಬಿಡುಗಡೆ ನಂತರ ಪಾಲಿಕೆಯಿಂದ ಅಪ್ರೋಚ್ ರಸ್ತೆಗಳ ನಿರ್ಮಾಣಕ್ಕೆ ಟೆಂಡರ್ ಕರೆಯಲು ಕ್ರಮವಹಿಸಬಹುದಾಗಿದೆ. |
| ಆ | ಮೈಸೂರು ರೈಲು ನಿಲ್ದಾಣದಲ್ಲಿ ರೈಲು ನಿಲ್ಲಲು ಜಾಗ ಇಲ್ಲದಾಗ ಅನೇಕ ರೈಲುಗಳು ಈ ರೈಲ್ವೆ ಲೆವೆಲ್ ಕ್ರಾಸಿಂಗ್ ಮೇಲೆಯೇ ನಿಲ್ಲುವುದರಿಂದ ಪ್ರತಿನಿತ್ಯ ವಾಹನ ಸಂಚಾರಕ್ಕೆ ಸಾರ್ವನಿಕರಿಗೆ ತೊಂದರೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮೈಸೂರು ರೈಲ್ವೆ ನಿಲ್ದಾಣದಲ್ಲಿ ಒಟ್ಟು ಪ್ಲಾಟ್ ಫಾರಂಗಳಿದ್ದು, ಈ ಎಲ್ಲಾ ಫ್ಲಾಟ್ ಪಾರಂಗಳಲ್ಲಿ ರೈಲುಗಳು ಅದರಲ್ಲೂ ಮುಖ್ಯವಾಗಿ ಬೆಳಗ್ಗೆ ಮತ್ತು ಸಂಜೆಯ (Peak Hours) ಸಮಯದಲ್ಲಿ ರೈಲುಗಳ ಆಗಮ ಮತ್ತು ನಿರ್ಗಮನ ವಾಗುತ್ತಿದ್ದು, ಈ ಸಮಯದಲ್ಲಿ ರೈಲು ನಿಲುಗಡೆಗೆ ಸ್ಥಳಾವಕಾಶ ಇಲ್ಲದಿರುವುದರಿಂದ, ಕೆಲವೊಮ್ಮೆ ಸರಿಯಾದ ಸಮಯಕ್ಕೆ ರೈಲು ಬಾರದ ಕಾರಣ ನಂಜನಗೂಡು ಮಾರ್ಗದಲ್ಲಿ ಬರುವ ರೈಲುಗಳನ್ನು ಕೆಲವು ನಿಮಿಷಗಳು ಮಾತ್ರ ಲೆವೆಲ್ ಕ್ರಾಸಿಂಗ್ ನಲ್ಲಿ ನಿಲ್ಲಿಸುವ ಅನಿವಾರ್ಯವಿರುತ್ತದೆ. |

| | | |
|---|---|---|
| ಇ | ಈ ರೈಲ್ವೆ ಮೇಲುಸೇತುವೆ ಕಾಮಗಾರಿಯನ್ನು ತ್ವರಿತವಾಗಿ ಪೂರ್ಣಗೊಳಿಸಲು ಕ್ರಮ ಜರುಗಿಸಲಾಗಿದೆಯೇ? | ಈ ರೈಲ್ವೆ ಮೇಲು ಸೇತುವೆ ನಿರ್ಮಾಣ ಕಾಮಗಾರಿಯನ್ನು ರೈಲ್ವೆ ಇಲಾಖೆಯಿಂದ ಹಾಗೂ ಕೂಡು ರಸ್ತೆಗಳ ನಿರ್ಮಾಣವನ್ನು ಮೈಸೂರು ಮಹಾನಗರ ಪಾಲಿಕೆ ವತಿಯಿಂದ ಕೈಗೊಳ್ಳಲಾಗುತ್ತಿದೆ. ಈಗಾಗಲೇ ರೈಲ್ವೆ ಇಲಾಖೆ ವತಿಯಿಂದ ಮೇಲು ಸೇತುವೆ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲು ಟೆಂಡರ್ ಕರೆಯಲಾಗಿದೆ. ಕೂಡು ರಸ್ತೆಗಳ ನಿರ್ಮಾಣ ಕಾಮಗಾರಿಗಾಗಿ ಮೈಸೂರು ಮಹಾನಗರ ಪಾಲಿಕೆಯಿಂದ ಡಿ.ಪಿ.ಆರ್.ನ್ನು ದಿನಾಂಕ: 10.04.2020 ರೊಳಗಾಗಿ ಸಿದ್ಧಪಡಿಸಲಾಗುವುದು. |

ಸಂಖ್ಯೆ: ಮೂಅಇ 42 ರಾರಾಹೆ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ